ಉಷಾ ಭೆಂಡೆ

# ಪಾಟೇಶ್ವರ ದೇವಾಲಯ ಸಮೂಹದ ಬಿಂಬಗಳ ಕೆಲವು ಗಮನಾರ್ಹ ಶಿಲ್ಪಲಕ್ಷಣಗಳು

ಮಹಾರಾಷ್ಟ್ರದ ಸತಾರಾದಿಂದ ಸುಮಾರು ೭ ಕಿ.ಮೀ.ದೂರದ ಬೆಟ್ಟಸಾಲುಗಳ ಮೇಲೆ ದೇಗಾಂವೆ ಬಳಿ ಇರುವ ಪಾಟೇಶ್ವರ ಗುಹಾದೇವಾಲಯಗಳ ಬಗ್ಗೆ ಹಳೆಯ ಸತಾರಾ ಕೋಶ(Gazetteer)ದಲ್ಲಿ ಮಾಹಿತಿ ಇರುವುದಾದರೂ ಮೊದಲಬಾರಿಗೆ ಇಲ್ಲಿ ಅವುಗಳ ಬಗ್ಗೆ ವಿವರವಾದ ಅಧ್ಯಯನವನ್ನು ಮಾಡಲಾಗಿದೆ.

ಮೆಟ್ಟಿಲು ಮೆಟ್ಟಿಲಾದ ಎರಡು ಕಲ್ಲಿನ ಕಲ್ಯಾಣಿಗಳ ಪಕ್ಕದಲ್ಲಿರುವ ಈ ದೇವಾಲಯ ಸಮೂಹದಲ್ಲಿ, ಪ್ರಾಕಾರದಿಂದ ಕೂಡಿದ ಪಾಟೇಶ್ವರ ದೇವಾಲಯ ಮತ್ತು ಭಾಗಶಃ ಕಟ್ಟಿದ ಹಾಗೂ ಭಾಗಶಃ ಕೊರೆದ ಐದು ಗುಹಾಲಯಗಳಿವೆ. ಈ ದೇವಾಲಯಗಳಲ್ಲಿರುವ ಕೆಲವು ಗಮನ ಸೆಳೆಯುವ ಬಿಂಬಗಳೆಂದರೆ ಪಾಟೇಶ್ವರ ದೇವಾಲಯದ ಗಣೇಶಾನೀ, ದುರ್ಗಾ, ಷಣ್ಮುಖ, ಎಲ್ಲಾ ಗುಹಾದೇವಾಲಯಗಳಲ್ಲಿನ ಶಿವಲಿಂಗ, ವಿಷ್ಣುವಿನ ದ್ವಾದಶಾವತಾರದ ಪಟ್ಟಿಕೆಗಳು, ತ್ರೈಮಾತೆಯರ ಪಟ್ಟಿಕೆಯ ಮಹಾಕಾಳೀ, ಮಹಾಲಕ್ಷ್ಮೀ ಮತ್ತು ಮಹಾಸರಸ್ವತಿ, ಚಾಮುಂಡಿಯ ಬಿಂಬ, ಅಷ್ಟಮಾತೃಕಾ ಪಟ್ಟಿಕೆ, ಹನ್ನೊಂದು ದೇವತೆಗಳ (ಏಕಾದಶ ರುದ್ರರು?) ಒಂದು ಪಟ್ಟಿಕೆ, ಸೂರ್ಯ ಅಥವಾ ಕೇಶವ ಅಥವಾ ದುರ್ಗಾ ಇರುವ ಸಹಸ್ರಲಿಂಗ ಪಟ್ಟಿಕೆ ಹಾಗೂ ಎಂಟು ಕೈ ಇರುವ ಪ್ರಾಣಿ–ಮಾನವರೂಪದ ನಂದಿ.

ಈ ಬಿಂಬಗಳಲ್ಲಿ ಕಾಣಬರುವ ಕೆಲವು ಆಸಕ್ತಿದಾಯಕ ಮತ್ತು ವಿಶೇಷ ಲಕ್ಷಣಗಳು ಹೀಗಿವೆ : ಇಲ್ಲಿ ಗಣೇಶಾನೀ ಇರುವುದು ಮಹತ್ವವಾದುದೆನಿಸುತ್ತದೆ. ಏಕೆಂದರೆ, ದಖ್ಖನ್ ಮತ್ತು ದಕ್ಷಿಣಭಾರತದಲ್ಲಿ (ಬೇರಾಘಾಟ್‌ನಲ್ಲಿರುವ ಚೌಸತ್‌ಯೋಗಿನೀ ದೇವಾಲಯದಲ್ಲಿರುವಂತೆ) ಗಣೇಶಾನಿಯನ್ನು ಹೆಚ್ಚಾಗಿ ಚಿತ್ರಿಸಿರುವುದಿಲ್ಲ. ದ್ವಾದಶಾವತಾರದ ಪಟ್ಟಿಕೆಯೇ ಅಪರೂಪದ್ದಾಗಿದ್ದು, ಅದರಲ್ಲಿ ವರಾಹಮೂರ್ತಿಯನ್ನು ಪೂರ್ಣವಾಗಿ ಪ್ರಾಣಿರೂಪದಲ್ಲಿ ಕಡೆಯಲಾಗಿದೆ. ಬುದ್ಧ ಮತ್ತು ತೀರ್ಥಂಕರರಿಬ್ಬರೂ ಪದ್ಮಾಸನದಲ್ಲಿದ್ದಾರೆ. ಅಪರೂಪವಾದ ತ್ರೈಮಾತೆಯರನ್ನು ಚಿತ್ರಿಸಿದ್ದು (ಮಾತೃಕಾದ ಒಂದು ಬಗೆಯಲ್ಲಿ),ಅದರೊಂದಿಗೆ ಅವರವರ ವಾಹನವೂ ಇವೆ. ಯೋಗಿಯಿಂದ ಪೂಜಿಸಲ್ಪಡುತ್ತಿರುವ ಇವು, ಸುಮಾರು ಹನ್ನೊಂದನೇ ಶತಮಾನದಿಂದ ಇಲ್ಲಿ ಪ್ರಸಿದ್ಧವಾಗಿದ್ದ ಮಹಾಲಕ್ಷ್ಮಿ ಆರಾಧನೆಗೆ ಅನುಗುಣವಾಗಿವೆ. ಅಷ್ಟಮಾತೃಕಾದಲ್ಲಿ ಗಣೇಶ ಮತ್ತು ವೀಣಾಧರರಿಲ್ಲದೆ, ಸಾಮಾನ್ಯವಾಗಿ ವೀರಭದ್ರನು ಈ ದೇವತೆಗಳ ಪಕ್ಕದಲ್ಲಿದ್ದಾನೆ. ಏಕಾದಶಲಿಂಗಗಳು ಎತ್ತರವಿಲ್ಲದ ಪೀಠಗಳ ಮೇಲಿದ್ದು, ಆ ಪೀಠಗಳು ತ್ರಿಕೋನ, ಬಿಲ್ಲು, ನಕ್ಷತ್ರ ಮುಂತಾದ ಆಕಾರಗಳಲ್ಲಿವೆ ; ಒಂದೊಂದೂ ತ್ರಿಶೂಲದಂತಹ ಭಿನ್ನವಾದ ಗುರುತುಗಳಿಂದ ಕೂಡಿವೆ. ಸಣ್ಣ ಸಣ್ಣ ಲಿಂಗಗಳ ಸಾಲುಗಳಿಂದ ಕೂಡಿದ ಸರಳಪೀಠದ ಮೇಲಿರುವ ಬೃಹದಾಕಾರದ ಲಿಂಗ ಮತ್ತು ವಿಷ್ಣು, ಕೇಶವ, ದುರ್ಗ–ಇರುವ ಸಹಸ್ರಲಿಂಗ ಪಟ್ಟಿಕೆಗಳು ವಿಶೇಷವಾಗಿ ಗಮನ ಸೆಳೆಯುತ್ತವೆ. ನಂದೀಶ್ವರನ ಬಿಂಬ

ದಲ್ಲಿ ಮುಂಭಾಗವನ್ನು ಮನುಷ್ಯಾಕೃತಿಯಂತೆ ಕಡೆಯಲಾಗಿದೆ. ಎಂಟು ಕೈ ಇದ್ದು ಪದ್ಮಾಸನದಲ್ಲಿ ಕುಳಿತಿದ್ದಾನೆ. ಗಲ್ಲವು ನಂದಿಯ ಮೂರ್ತಿಯಂತಿದೆ. ತಲೆಯಿಂದ ಹಿಂದಿನ ಭಾಗವು ನೆಲಕ್ಕೆ ಹೊಟ್ಟೆಯಾನಿಸಿ ಮಲಗಿ ತಲೆ ಎತ್ತಿಕೊಂಡಿರುವ ನಂದಿಯಂತೆ (ಮೃಗರೂಪದ ದೇವತೆಯಂತೆ) ಬಿಡಿಸಿದೆ. ಒಂದು ಕೈ ಚಿನ್ಮುದ್ರೆಯಲ್ಲಿಯೂ ಉಳಿದ ಕೈಗಳು ಬಿಲ್ಲು ಬಾಣ, ಶೂಲ, ಖೇಟಕಧಾರಿಗಳಾಗಿಯೂ ಉಳಿದೆರಡು ಕೈಗಳು ಅಭಯ ಮತ್ತು (ಜಪಮಾಲೆ ಸಹಿತವಾದ) ವರದಮುದ್ರೆಗಳಲ್ಲಿಯೂ ಇವೆ.

ದ್ವಾದಶಾವತಾರ, ತ್ರೈದೇವೀ, ಏಕಾದಶರುದ್ರ ಇತ್ಯಾದಿ ಬಿಂಬಗಳು ಶೈಲಿಯ ದೃಷ್ಟಿಯಿಂದ ಕ್ರಿ.ಶ. ೧೨-೧೩ನೇ ಶತಮಾನಕ್ಕೆ ಸೇರುತ್ತವೆ. ಉಳಿದವು ಕ್ರಿ.ಶ. ೧೪-೧೬ನೇ ಶತಮಾನದವು. ಈ ಪ್ರದೇಶವು ಕ್ರಿ. ಶ. ೧೧ನೇ ಶತಮಾನದಿಂದ ಮರಾಠರ ಕಾಲದವರೆಗೂ (ಇಲ್ಲಿಯ ದೇವಾಲಯಗಳು ಸೂಚಿಸುವಂತೆ) ಪ್ರಸಿದ್ಧ ಶೈವಕೇಂದ್ರವಾಗಿದ್ದಂತೆ ತೋರುತ್ತದೆ. ಕೆಲವು ಬಿಂಬಗಳಲ್ಲಿ ನಾಥಸಂಪ್ರದಾಯದ ತಾಂತ್ರಿಕ ಪ್ರಭಾವವು ಇರುವಂತಿದೆ. ಈ ಸಂಪ್ರದಾಯವು ಮಧ್ಯಕಾಲೀನೋತ್ತರ ಕಾಲದಲ್ಲಿ ಇಲ್ಲಿ ಪ್ರಚಲಿತದಲ್ಲಿದ್ದಿತು. ಅಲ್ಲದೆ ಈಗಲೂ ನಾಥ ಸಂಪ್ರದಾಯದ ಭಕ್ತರು ಸತಾರಾ–ಕೊಲ್ಹಾಪುರಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಕಂಡುಬರುತ್ತಾರೆ.

ಇಲ್ಲಿ, ಪ್ರಾಣಿ–ಮಾನವ ರೂಪದಂತೆ ನಂದಿಯನ್ನು ಬಿಡಿಸಿರುವಂತಹುದು ಅಪರೂಪವೇನಲ್ಲ ; ಬಾದಾಮಿ ಚಾಳುಕ್ಯರ ಬಿಂಬಗಳಲ್ಲೂ ಇದು ಕಂಡುಬರುತ್ತದೆ. ಉದಾಹರಣೆಗೆ, ಹರಿ–ಹರರ ಪಟ್ಟಿಕೆಯಲ್ಲಿ ನಂದಿಯು ಪ್ರಾಣಿ–ಮಾನವ ರೀತಿಯಲ್ಲಿದ್ದು, ಪಾರ್ವತಿಯು ಶಿವನ ಪಕ್ಕದಲ್ಲಿಯೂ ಗರುಡ ಮತ್ತು ಲಕ್ಷ್ಮೀ ವಿಷ್ಣುವಿನ ಪಕ್ಕದಲ್ಲಿಯೂ ಇರುವರು. ನಂದಿಯನ್ನು ಸಾಮಾನ್ಯವಾಗಿ ಮೃಗರೂಪದ ದೇವತೆಯ ಆಕಾರದಲ್ಲೇ ಬಿಡಿಸಿರುವುದುಂಟು. ಆದ್ದರಿಂದ ಈ ಪಾಟೇಶ್ವರದಲ್ಲಿನ ಬಿಂಬದ ವಿಶೇಷತೆಯೆಂದರೆ, ಅದಕ್ಕೆ ಎಂಟು ಕೈ ಇರುವುದು ಮತ್ತು ಪ್ರಾಣಿ-ಮಾನವ ರೂಪದಂತಿರುವುದು.

(ಕನ್ನಡಾನುವಾದ/ಕೂ. ಸ. ಅಪರ್ಣ)